## 3 ತಾಗಳ ಮಟ್ಟದ ಸೈಕಲ್ ಸ್ಪರ್ಧೆ

ಬಿಳಾಲುಕೊಪ್ಪ : ಇಲ್ಲಿನ ಮೇರುತಿ ಜೇಸೀಸ್‌ನವರು ಗಣರಾಜ್ಯ ದಿನಾಚರಣೆ ಅಂಗವಾಗಿ ಜ. 26ರಂದು ಕೊಪ್ಪ, ಶೃಂಗೇರಿ, ನ. ರಾ. ಪುರ ತಾಗಳ ಮಟ್ಟದ ಪುರುಷರ ಸೈಕಲ್ ಸ್ಪರ್ಧೆಯನ್ನು ಏರ್ಪಡಿಸಿದ್ದಾರೆ. ಅಂದು ಮಧ್ಯಾಹ್ನ 3 ಗಂಟೆಗೆ ಬಸರಿಕಟ್ಟೆಯಿಂದ ಆರಂಭವಾದ ಸ್ಪರ್ಧೆ ಹೇರೂರು, ಜಯಪುರ, ಗುಡ್ಡೇತೋಟ ಮಾರ್ಗವಾಗಿ ಸುಮಾರು 30 ಕಿ.ಮೀ. ಕ್ರಮಿಸಿ ಬಿಳಾಲುಕೊಪ್ಪದಲ್ಲಿ ಕೊನೆಗೊಳ್ಳುತ್ತದೆ.

ಪ್ರವೇಶ ಉಚಿತ. ಸ್ಪರ್ಧಿಗಳು ಪ್ರವೇಶ ಪತ್ರಗಳನ್ನು ಅಂದು ಮಧ್ಯಾಹ್ನ 2.30 ಗಂಟೆಯೊಳಗೆ ಬಸರಿಕಟ್ಟೆಯಲ್ಲಿ ವ್ಯವಸ್ಥಾಪಕರಿಗೆ ಸಲ್ಲಿಸಬೇಕು. 3 ಬಹುಮಾನಗಳನ್ನು ಇಡಲಾಗಿದೆ.

### ಕೃಷಿ ವಿಚಾರ ಸಂಕಿರಣ

ಬಿಳಾಲ್‌ಕೊಪ್ಪ : ಇಲ್ಲಿನ ಕೃಷಿ ವಿಚಾರ ವಿನಿಮಯ ಕೇಂದ್ರ, ಮತ್ತು ಮಂಡಲ ಪಂಚಾಯ್ತಿ ಹಾಗೂ ಕೃಷಿ ಇಲಾಖೆಗಳ ಸಂಯುಕ್ತ ಆಶ್ರಯದಲ್ಲಿ ಕೃಷಿ ವಿಚಾರ ಸಂಕಿರಣವೊಂದು ಜ. 6 ರಂದು ಬಿ. ಎಲ್. ಭಾಸ್ಕರ್ ಅಧ್ಯಕ್ಷತೆಯಲ್ಲಿ ನಡೆಯಿತು. ಬಿ. ರಮೇಶರಾವ್ ಮತ್ತು ಜಿ. ಸಿ. ಗೋಪಾಲಕೃಷ್ಣ ಅಧ್ಯಕ್ಷತೆ ವಹಿಸಿದ್ದರು. ಬೇಸಿಗೆ ಬೆಳೆಗಳ ಬಗ್ಗೆ ಸ! ಕೃಷಿ ನಿರ್ದೇಶಕ ಎ. ಎಂ. ಆನಂತದಾಸ್ ಮಾಹಿತಿ ನೀಡಿದರು.

ಇದೇ ಸಂದರ್ಭದಲ್ಲಿ ಸಣ್ಣ–ಅತಿ ಸಣ್ಣ ರೈತರಿಗೆ ಎಣ್ಣೆ ಕಾಳು, ದ್ವಿದಳ ಧಾನ್ಯಗಳ ಕಿರು ಬಿತ್ತಗಳನ್ನು ಶ್ರೀಮತಿ ಸುಲೋಚನಮ್ಮ ವಿತರಿಸಿದರು. ಆಯ್ದ ಗಿರಿಜನ ರೈತರಿಗೆ ಕೃಷಿ ಉಪಕರಣಗಳನ್ನು ಕೆ. ಆರ್. ದೇವೇಂದ್ರ ನೀಡಿದರು. ಎ. ಎಸ್. ಶಿವಮೂರ್ತಿ ಸ್ವಾಗತಿಸಿ, ಬಿ. ಟಿ. ವೆಂಕಟೇಶ್ ವಂದಿಸಿದರು.

# ಸಾಹಸಿ, ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಪುರಸ್ಕಾರ

ಹರಿಹರಪುರ : ಬಾವಿಗೆ ಬಿದ್ದ ಮಗುವೊಂದನ್ನು ತನ್ನ ಜೀವದ ಹಂಗು ತೊರೆದು ರಕ್ಷಿಸಿದ ಪಿಯುಸಿ ವಿದ್ಯಾರ್ಥಿ ಎಚ್.ಆರ್. ಸತೀಶ್ ಮತ್ತು ಆಕಾಶವಾಣಿಯ 'ನಿಸರ್ಗ ಸಂಪದ' ಪರೀಕ್ಷೆಯಲ್ಲಿ ದ್ವಿತೀಯ ಸ್ಥಾನ ಗಳಿಸಿದ ಎ. ಕೆ. ವಸಂತ ಇವರಿಗೆ ಇಲ್ಲಿನ ಕಿರಿಯ ಕಾಲೇಜಿನ ಬೆಳ್ಳಿಹಬ್ಬದ ನೆನಪಿಗಾಗಿ ನಡೆದ ಕ್ರೀಡಾ ಮತ್ತು ಸಾಂಸ್ಕೃತಿಕ ಉತ್ಸವದಲ್ಲಿ ಬಹುಮಾನ ನೀಡಿ ಪುರಸ್ಕರಿಸಲಾಯಿತು.

ಇದೇ ರೀತಿ 8ನೇ ತರಗತಿಯಿಂದ ಪಿಯುಸಿವರೆಗೆ ಪ್ರತೀ ತರಗತಿಯಲ್ಲೂ ಅತಿ ಹೆಚ್ಚು ಅಂಕ ಗಳಿಸಿದ ಒಬ್ಬೊಬ್ಬ ವಿದ್ಯಾರ್ಥಿ ಅಥವಾ ವಿದ್ಯಾರ್ಥಿನಿಗೆ ಬಹುಮಾನ ನೀಡಲಾಯಿತು.

ಜ. 8 ಮತ್ತು 9ರಂದು ನಡೆದ ಈ ಉತ್ಸವಗಳಲ್ಲಿ ಇದೇ ಸಂಸ್ಥೆಯ ಹಿಂದೀ ಅಧ್ಯಾಪಕ ಉಮೇಶ್ ರಚಿಸಿ, ನಿರ್ದೇಶಿಸಿ, ಹಿನ್ನೆಲೆ ಗಾಯನ ನೀಡಿದ 'ನಮ್ಮೊಳಗೊಬ್ಬ ಶಿವಭೂತಿ' ರೂಪಕ ಪ್ರದರ್ಶನ ಉತ್ತಮವಾಗಿತ್ತು.

ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಸಮಗ್ರ ಪ್ರಶಸ್ತಿಯನ್ನು ಜಿ. ಎಂ. ಛಾಯಾ (ಕಾಲೇಜು ವಿಭಾಗ) ಮತ್ತು ಕೆ.ಎನ್. ಅನಿಲ್ ಕುಮಾರ್ (ಪ್ರೌಢಶಾಲಾ ವಿಭಾಗ) ಪಡೆದರೆ, ಕ್ರೀಡಾ ವಿಭಾಗದಲ್ಲಿ ಎಚ್. ಆರ್. ಸತೀಶ್ (ಕಾಲೇಜು) ಮತ್ತು ಕೆ. ಎಂ. ದಮಯಂತಿ (ಪ್ರೌಢಶಾಲೆ) ಪಡೆದರು.

### ಎಸ್ಸೆಸ್ಸೆಲ್ಸಿ ಪರೀಕ್ಷಾರ್ಥಿಗಳಿಗೆ ಮಾರ್ಗದರ್ಶನ, ಉಪಾಹಾರ

ಇಲ್ಲಿನ ರಾಷ್ಟ್ರೋತ್ಥಾನ ಬಳಗವು ಕಳೆದ ವರ್ಷದಂತೆ ಈ ಬಾರಿಯೂ ಎಸ್ಸೆಸ್ಸೆಲ್ಸಿ ಪರೀಕ್ಷಾರ್ಥಿಗಳಿಗೆ ಪರೀಕ್ಷೆ ಎದುರಿಸುವ ಬಗ್ಗೆ ವಿಷಯ ತಜ್ಞರಿಂದ ಮಾರ್ಗದರ್ಶನ ಹಾಗೂ ಪರೀಕ್ಷಾ ಅವಧಿಯಲ್ಲಿ ದೂರದಿಂದ ಬರುವ ವಿದ್ಯಾರ್ಥಿಗಳಿಗೆ ಮಧ್ಯಾಹ್ನ ಉಪಾಹಾರದ ವ್ಯವಸ್ಥೆ ಮಾಡಲು ಯೋಜಿಸಿದೆ.

## ಎಸ್ಸೆಸ್ಸೆಲ್ಸಿ ಪರೀಕ್ಷೆಗಳ ಶುಲ್ಕ ಏರಿಕೆಗೆ ಎಐಎಸ್‌ಎಫ್ ಪ್ರತಿಭಟನೆ

ಕೊಪ್ಪ : ಎಸ್ಸೆಸ್ಸೆಲ್ಸಿ ಪರೀಕ್ಷೆ ಮತ್ತು ಅದಕ್ಕೆ ಸಂಬಂಧಪಟ್ಟ ಬಾಬುಗಳಲ್ಲಿ ಶುಲ್ಕವನ್ನು ತೀವ್ರವಾಗಿ ಏರಿಸಿರುವುದರ ಬಗ್ಗೆ ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್ ರಾಜ್ಯಾದ್ಯಂತ ನಡೆಸಿದ ಪ್ರತಿಭಟನೆಯ ಅಂಗವಾಗಿ ಜ. 11 ರಂದು ಕೊಪ್ಪದಲ್ಲೂ ಸುಮಾರು 500ಕ್ಕೂ ಹೆಚ್ಚು ವಿದ್ಯಾರ್ಥಿ–ವಿದ್ಯಾರ್ಥಿನಿಯರು ಪೇಟೆಯಲ್ಲಿ ಪ್ರತಿಭಟನಾ ಮೆರವಣಿಗೆ ನಡೆಸಿ, ಬಸ್ ಸ್ಟಾಂಡ್ ಮತ್ತು ತಾ॥ ಕಚೇರಿ ಬಳಿ ಸಭೆ ನಡೆಸಿದರು.

## ಬಾಳಗಡಿ, ಕಮ್ಮರಡಿ ಯುವಜನ ತಂಡಗಳು ರಾಜ್ಯ ಮೇಳಕ್ಕೆ

ಕೊಪ್ಪ : ಇಲ್ಲಿನ ಬಾಳಗಡಿಯ ಸರ್ವೋದಯ ಯುವಕ ಸಂಘದವರು ಅಭಿನಯಿಸಿದ 'ಹುತ್ತ' ನಾಟಕ (ನಿರ್ದೇಶನ: ಕೆ. ಎಸ್. ಪ್ರಕಾಶ್) ಮತ್ತು ಕಮ್ಮರಡಿಯ ಪ್ರಕೃತಿ ಯುವತಿ ಮಂಡಳಿಯ 'ಭೈರ' ನಾಟಕ (ನಿರ್ದೇಶನ: ಮಾಲತಿ ಕಾಸರವಳ್ಳಿ) ವಿಭಾಗ ಮಟ್ಟದ ಯುವಜನ ಮೇಳದಲ್ಲಿ ಪ್ರಥಮ ಸ್ಥಾನಗಳನ್ನು ಗಳಿಸಿ ರಾಜ್ಯ ಯುವಜನ ಮೇಳದಲ್ಲಿ ಜಿಲ್ಲೆಯನ್ನು ಪ್ರತಿನಿಧಿಸಲಿವೆ.

ಕುಂಚೂರಿನ ಪಾರ್ವತಿ ಯುವತಿ ಮಂಡಲಿಯ ಜೆ. ಆರ್. ಮೀನಾಕ್ಷಿ, ಲಾವಣಿಯಲ್ಲಿ ಎರಡನೇ ಸ್ಥಾನ ಪಡೆದು ರಾಜ್ಯ ಮೇಳದಲ್ಲಿ ಭಾಗವಹಿಸುವ ಅರ್ಹತೆ ಪಡೆದಿದ್ದಾರೆ. ಬೀರೂರಿನ ಡೊಳ್ಳು ಕುಣಿತದ ತಂಡ ಜಿಲ್ಲೆಯನ್ನು ಪ್ರತಿನಿಧಿಸುವ ಇನ್ನೊಂದು ತಂಡವಾಗಿದೆ.

## ಐಆರ್‌ಡಿಪಿ ಸಾಲ ನೀಡಿಕೆ ಹರಿಹರಪುರ ಸಿ॥ ಬ್ಯಾಂಕ್ ತಾಲ್ಲೂಕಿಗೆ ಪ್ರಥಮ

ಹರಿಹರಪುರ: ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿ ವಿವಿಧ ಸ್ತರದ ಜನಗಳಿಗಾಗಿ ಸಾಲ ನೀಡಿಕೆಯಲ್ಲಿ ಇಲ್ಲಿನ ಸಿಂಡಿಕೇಟ್ ಬ್ಯಾಂಕ್ ಡಿಸೆಂಬರ್ 8ರ ವರೆಗಿನ ಅವಧಿಯಲ್ಲಿ ತನ್ನ ವಾರ್ಷಿಕ ಗುರಿ ಪೂರೈಸಿ, ಕೊಪ್ಪ ತಾಲ್ಲೂಕಿಗೆ ಪ್ರಥಮ ಸ್ಥಾನದಲ್ಲಿದೆ. 23 ಜನ ಫಲಾನುಭವಿಗಳಿಗೆ ಬ್ಯಾಂಕು 80 ಸಾವಿರ ರೂ. ನೀಡಿದ್ದು, ಅದರಲ್ಲಿ 19,700 ರೂ. ಸಹಾಯಧನವಾಗಿದೆ





## ಅಧಿಕಾರ ಬಲದ ಪ್ರದರ್ಶನವಲ್ಲ

ನಮ್ಮ 13.12.87ರ ಸಂಚಿಕೆಯಲ್ಲಿ 'ಅಧಿಕಾರ ಬಲದ ಪ್ರದರ್ಶನ ?' ಎಂಬ ಶೀರ್ಷಿಕೆಯಡಿ ಪ್ರಕಟವಾಗಿದ್ದ ವರದಿಗೆ ನ.ರಾ.ಪುರ. ತಾ॥ ಮೆಣಸೂರು ಮಂಡಲ ಪ್ರಧಾನ ಎ. ಜಿ. ಬೆಳ್ಳಯ್ಯಗೌಡ ಈ ಕೆಳಗಿನಂತೆ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದಾರೆ:

"....ಸದರಿ ವರದಿಯಲ್ಲಿ ನನ್ನ ಹೆಸರಿಲ್ಲದಿದ್ದರೂ ಬಹುಶಃ ಅದು ನನ್ನನ್ನು ಕುರಿತದ್ದೇ ಇರಬೇಕು. ಏಕೆಂದರೆ, ಆ ಒಂದು ದಿನ ಯಾರೋ ಒಬ್ಬರು ರೈತರು ನನ್ನ ಹತ್ತಿರ ಯಾವುದಕ್ಕೋ ಸಹಿ ಕೇಳಿದರು. ನಾನು ಯಾವಾಗಲೂ ನಮ್ಮಿಂದಾಗಬೇಕಾದ ಸಣ್ಣಪುಟ್ಟ ಕೆಲಸಕ್ಕಾಗಿಯೂ ರೈತರನ್ನು ಕಛೇರಿಗೆ ಬರಲು ಹೇಳಬಾರದೆಂಬುದಕ್ಕಾಗಿ ಅರ್ಧ ಕಛೇರಿಯನ್ನು ನನ್ನ ಕೈ ಚೀಲದಲ್ಲೇ ಇಟ್ಟುಕೊಂಡಿರುವವನು. ('ನೋಡಿ ಇಲ್ಲಿ' ಎಂದು ಇಂಕ್ ಪ್ಯಾಡ್, ಸೀಲು ಇತ್ಯಾದಿಗಳನ್ನು ಕೈ ಚೀಲದಿಂದ ತೆಗೆದು ತೋರಿಸುತ್ತಾ). ಅಂದು ಆಕಸ್ಮಾತ್ ಇಟ್ಟುಕೊಂಡಿರಲಿಲ್ಲ. ಅದಕ್ಕಾಗಿ ಕಛೇರಿಗೆ ಬರಲು ಹೇಳಬೇಕಾಯಿತು.

ಅಷ್ಟಕ್ಕೂ ಜನ ಸೇರಿಗಳುವುದಾದರೆ ಹೋಗಲಿ, ಬೇಡವೇ ಬೇಡ ಎಂದು ಈಗ ವಾರದಲ್ಲಿ 3 ದಿನ– ಸೋಮವಾರ, ಬುಧವಾರ, ಶುಕ್ರವಾರ ಮಾತ್ರ, ಕಛೇರಿಯಲ್ಲೇ ಕುಳಿತು ಕೆಲಸ ಮಾಡಿಕೊಡುವುದೆಂದು ತೀರ್ಮಾನಿಸಿದ್ದೇನೆ........"

ಏನಕೇನ ಪ್ರಕಾರದಿಂದ ರೈತರ ಕೆಲಸ ಆಗುವಂತೆ ಅಧಿಕಾರಿಗಳಿಗೂ ಅಧಿಕಾರಸ್ಥರಿಗೂ ದುಂಬಾಲು ಬೀಳುತ್ತ, ಸ್ವಲ್ಪ 'ಬಾಯಿ ಹರಕು' ಎನ್ನಿಸಿಕೊಂಡರೂ ತಾನು ಕೂಡ ಕೆಲಸ ಮಾಡಿಕೊಡುತ್ತ ಓಡಾಡುವ ಈ ಬೆಳ್ಳಯ್ಯಗೌಡರಿಗೆ, "ಕಟ್ಟೆದ್ದು ಮಾಡಿ ಆಕ್ಷೇಪಣೆಗೊಳಗಾಗುವವರೇ ತಮ್ಮ ಕೆಲಸ ನಿಲ್ಲಿಸುವುದಿಲ್ಲ. ನೀವು ಒಳ್ಳೆಯದು ಮಾಡುವವರು ತಪ್ಪು ಕಲ್ಪನೆಯ ಆರೋಪಗಳಿಗೆ ಅಂಜಿ ನಿಮ್ಮ ಕೆಲಸ ನಿಲ್ಲಿಸಬಾರದು...." ಎಂದು 'ಮುಂಜಾವು' ಮನವಿ ಮಾಡಿದೆ.



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀಪಿಕಾ ಅಚ್ಚುಕೂಟ, ಕೊಪ್ಪ